# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 413
**ಸದಸ್ಯರ ಹೆಸರು** : ಶ್ರೀ ಹೆಚ್.ಎಂ. ರಮೇಶ್ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 04.02.2021
**ಉತ್ತರಿಸುವ ಸಚಿವರು** : ಮುಖ್ಯಮಂತ್ರಿಗಳು

*****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸುಟ್ಟು ಹೋಗಿರುವ ವಿದ್ಯುತ್ ಪರಿವರ್ತಕಗಳನ್ನು ಬದಲಾಯಿಸುವಲ್ಲಿ ವಿಳಂಬವಾಗುತ್ತಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ನಿಯಮಾನುಸಾರ ವಿಫಲಗೊಂಡ ಪರಿವರ್ತಕಗಳನ್ನು ನಗರ ಪ್ರದೇಶಗಳಲ್ಲಿ 24 ಗಂಟೆಯೊಳಗೆ ಮತ್ತು ಗ್ರಾಮಾಂತರ ಪ್ರದೇಶದಲ್ಲಿ 72 ಗಂಟೆಯೊಳಗೆ ಬದಲಾಯಿಸಬೇಕಾಗಿರುತ್ತದೆ. ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸುಟ್ಟುಹೋಗಿರುವ ವಿದ್ಯುತ್ ಪರಿವರ್ತಕಗಳನ್ನು ಯಾವುದೇ ವಿಳಂಬವಾಗದಂತೆ ಬದಲಾಯಿಸಲಾಗುತ್ತಿದೆ.<br><br>ಪರಿವರ್ತಕಗಳು ವಿಫಲವಾದಲ್ಲಿ, ವಿಫಲವಾದ ಪರಿವರ್ತಕಗಳನ್ನು ಬದಲಾಯಿಸುವವರೆಗೆ ತಾತ್ಕಾಲಿಕವಾಗಿ ಸಮೀಪದಲ್ಲಿರುವ ಪರಿವರ್ತಕದ ತಾಂತ್ರಿಕ ಸಾಧ್ಯತೆಗನುಗುಣವಾಗಿ ಜಾಲ ಸಂಪರ್ಕ ನೀಡಿ ರೈತರಿಗೆ ಯಾವುದೇ ತೊಂದರೆಯಾಗದಂತೆ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಗ್ರಾಮಾಂತರ ಪ್ರದೇಶದಲ್ಲಿನ ಗೃಹ ಬಳಕೆ, ಕುಡಿಯುವ ನೀರು ಹಾಗೂ ಆಸ್ಪತ್ರೆಗಳಿಗೆ ವಿದ್ಯುತ್ ಪೂರೈಸುವ ಪರಿವರ್ತಕಗಳು ವಿಫಲಗೊಂಡರೆ 24 ಗಂಟೆಯೊಳಗೆ ಬದಲಾಯಿಸಲಾಗುತ್ತಿದೆ. ಗ್ರಾಮಾಂತರ ಪ್ರದೇಶದಲ್ಲಿ ರೈತರ ನೀರಾವರಿ ಪಂಪ್‌ಸೆಟ್‌ನ ವಿಫಲಗೊಂಡ ಪರಿವರ್ತಕಗಳನ್ನು 72 ಗಂಟೆಯೊಳಗೆ ಬದಲಾಯಿಸಲಾಗುತ್ತಿದ್ದು, ಲಭ್ಯತೆ ಹಾಗೂ ಜೇಷ್ಠತೆ ಆಧಾರದ ಮೇಲೆ ಬದಲಾಯಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br><br>ವಿದ್ಯುತ್ ಪರಿವರ್ತಕಗಳನ್ನು ಸುಲಭವಾಗಿ ದೊರೆಯುವಂತೆ ಮಾಡಲು ಸರ್ಕಾರ ರೂಪಿಸಿದ ಯೋಜನೆಯ ಅನ್ವಯ ತಾಲ್ಲೂಕು/ಉಪ-ವಿಭಾಗಗಳಲ್ಲಿ ಟ್ರಾನ್ಸ್ ಫಾರ್ಮರ್ ಬ್ಯಾಂಕ್ ಸ್ಥಾಪಿಸಲಾಗಿದೆ ಮತ್ತು ವಿಫಲವಾದ ವಿದ್ಯುತ್ ಪರಿವರ್ತಕಗಳ ದುರಸ್ತಿಗಾಗಿ ಅಗತ್ಯವಿರುವ ತಾಲ್ಲೂಕುಗಳಲ್ಲಿ ಪರಿವರ್ತಕ ದುರಸ್ತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. |
| ಆ) | ವಿದ್ಯುತ್ ಪರಿವರ್ತಕಗಳನ್ನು ಬದಲಾಯಿಸುವ ಸಮಯದಲ್ಲಿ ವಿಳಂಬದಿಂದಾಗಿ ರೈತರ ಬೆಳೆ ಹಾಳಾಗಿ ತೊಂದರೆಯಾಗುತ್ತಿರುವ ಬಗ್ಗೆ ಸರ್ಕಾರದ ಕ್ರಮವೇನು: | |
| ಇ) | ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರಿಗಾಗಿ ಅಳವಡಿಸಿರುವ ವಿದ್ಯುತ್ ಪರಿವರ್ತಕಗಳು ಸುಟ್ಟು ಹೋದಾಗ ಎಷ್ಟು ದಿನಗಳಲ್ಲಿ ಬದಲಾಯಿಸಲಾಗುವುದು: (ವಿವರ ನೀಡುವುದು) | |
| ಈ) | ಕುಡಿಯುವ ನೀರಿಗೆ ಅಳವಡಿಸಿರುವ ವಿದ್ಯುತ್ ಪರಿವರ್ತಕಗಳು ಸುಟ್ಟು ಹೋದರೆ ಸರ್ಕಾರದಿಂದ ತಾತ್ಕಾಲಿಕವಾಗಿ ಯಾವ ಕ್ರಮಗಳನ್ನು ಕೈಗೊಳ್ಳಲಾಗಿರುವುದು ಎಂಬುದರ ಕುರಿತು ಮಾಹಿತಿ ನೀಡುವುದು; | |

| | | |
|---|---|---|
| ಉ) | ಮುಂದೆ ಬರುವ ಬೇಸಿಗೆಯಲ್ಲಿ ಉದ್ಭವಿಸುವ ವಿದ್ಯುತ್ ಕೊರತೆ ನೀಗಿಸಲು ಇಲಾಖೆ ತೆಗೆದುಕೊಂಡಿರುವ ಕ್ರಮಗಳಾವುವು? (ಮಾಹಿತಿ ನೀಡುವುದು) | ಪ್ರಸ್ತುತ, ರಾಜ್ಯದಲ್ಲಿ ಬೇಡಿಕೆಗೆ ಅನುಗುಣವಾಗಿ ವಿದ್ಯುತ್ ಸರಬರಾಜು ಆಗುತ್ತಿದ್ದು, ಯಾವುದೇ ಕೊರತೆ ಇರುವುದಿಲ್ಲ.<br><br>ಬೇಸಿಗೆ ಕಾಲದಲ್ಲಿ ವಿದ್ಯುತ್ ಬೇಡಿಕೆಯನ್ನು ಸಮರ್ಪಕವಾಗಿ ಪೂರೈಸುವ ಸಲುವಾಗಿ 11 ಕೆ.ವಿ ವಿದ್ಯುತ್ ವಿತರಣಾ ಮಾರ್ಗಗಳ, ವಿದ್ಯುತ್ ಪರಿವರ್ತಕ ಕೇಂದ್ರಗಳ ಹಾಗೂ ಎಲ್.ಟಿ ವಿದ್ಯುತ್ ಮಾರ್ಗಗಳ ಸಮರ್ಪಕ ನಿರ್ವಹಣೆ ಮಾಡಲು ಕ್ರಮ ಕೈಗೊಳ್ಳಲಾಗಿರುತ್ತದೆ. ಮುಂದುವರೆದು, ಹೊಸ ವಿದ್ಯುತ್ ಉಪಕೇಂದ್ರಗಳ ಸ್ಥಾಪನೆ, ಹಾಲಿ ಇರುವ ಉಪಕೇಂದ್ರಗಳ ಸಾಮರ್ಥ್ಯ ಹೆಚ್ಚಳ ಹಾಗೂ ಹೆಚ್ಚುವರಿ ವಿತರಣಾ ಪರಿವರ್ತಕಗಳ ಅಳವಡಿಕೆ, ಹೊಸ ಲಿಂಕ್ ಲೈನ್ ಮಾರ್ಗಗಳ ರಚನೆ ಮೊದಲಾದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ |

ಸಂಖ್ಯೆ: ಎನರ್ಜಿ 20 ಇಬಿಎಸ್ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ